KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಡಿಸೆಂಬರ್ ೨೧, ೨೦೦೬ (ಮಾರ್ಗಶಿರ ೩೦, ಶಕ ವರ್ಷ ೧೯೨೮) | ಸಂಚಿಕೆ ೫೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-113/2006 ಎಫ್, ದಿನಾಂಕ: 16ನೇ ನವೆಂಬರ್ 2006**

**ಅರ್ಜಿದಾರರು:**

ಶ್ರೀಮತಿ ಜಯಲಕ್ಷ್ಮಮ್ಮ ಕೊಂ ಬೈರಪ್ಪ, ಬೊಮ್ಮನ ಹಳ್ಳಿ ಹೊಸಬಡಾವಣೆ ಭದ್ರಾವತಿ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ರಾಜಶೇಖರ್, ಎಸ್.ಆರ್.ಎಸ್. ಟ್ರಾವೆಲ್ಸ್, ನಂ.321, ಟಿ.ಎಸ್.ಪಿ. ರೋಡ್, ಬೆಂಗಳೂರು ಮೆಡಿಕಲ್ ಕಾಲೇಜು ಮುಂದೆ, ಕಲಾಸಿಪಾಳ್ಯ, ಬೆಂಗಳೂರು.
2. ನ್ಯೂ ಇಂಡಿಯಾ ಅನ್ಸೂರೆನ್ಸ್ ಕಂ. ಲಿ., ವಿಠಲ್ ಮಲ್ಯ ಹಾಸ್ಪಿಟಲ್ ರೋಡ್, ಕಂಠೀರವ ಸ್ಟೇಡಿಯಂ ಮುಂದೆ, ಮಲ್ಯ ಹಾಸ್ಪಿಟಲ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರಳಾದ ಶ್ರೀಮತಿ ಜಯಲಕ್ಷ್ಮಮ್ಮ ಇವರು ತಮ್ಮ ಮಗನಾದ ದಿ. ಶ್ರೀ ಸತೀಶ ಇವರು 1ನೇ ಪ್ರತಿವಾದಿಗಳಾದ ಶ್ರೀ ರಾಜಶೇಖರ್ ಎಸ್.ಆರ್.ಎಸ್. ಟ್ರಾವೆಲ್ಸ್, ಟಿ.ಎಸ್.ಪಿ. ರೋಡ್, ಕಲಾಸಿಪಾಳ್ಯ, ಬೆಂಗಳೂರು ಇವರಲ್ಲಿ ಕೆಲಸಗಾರರಾರಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 14.11.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1681

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮಂಗಳೂರು ವಿಭಾಗ, ಮಂಗಳೂರು.

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ:ಕಂಇ 24 ಎಲ್‌ಆರ್‌ಎಂ 2006, ಬೆಂಗಳೂರು, ದಿನಾಂಕ 22ನೇ ನವೆಂಬರ್ 2006.**

ಭಾರತಿ ಯೋಗಧಾಮ ಸಂಸ್ಥೆ, ಮೈಸೂರು ಇವರು ಮೈಸೂರು ತಾಲ್ಲೂಕು, ಬಂಡಿಪಾಳ್ಯ, ಉತ್ತನಹಳ್ಳಿ ಗ್ರಾಮದ ಸರ್ವೆನಂ. 15/1ರಲ್ಲಿ 01 ಎಕರೆ 17ಗುಂಟೆ, ಸರ್ವೆನಂ.17ರಲ್ಲಿ 06ಎಕರೆ 26ಗುಂಟೆ, ಸರ್ವೆನಂ.18ರಲ್ಲಿ 23 ಗುಂಟೆ, ಸರ್ವೆನಂ. 19/1ರಲ್ಲಿ 34

ಗುಂಟೆ, ಸರ್ವೆನಂ.19/3ರಲ್ಲಿ 06 ಗುಂಟೆ, ಸರ್ವೆನಂ. 23/2ರಲ್ಲಿ 18 ಗುಂಟೆ ಹೀಗೆ ಒಟ್ಟು 10ಎಕರೆ 04 ಗುಂಟೆ ಹಾಗೂ ಬಂಡಿಪಾಳ್ಯ ಗ್ರಾಮದ ಸರ್ವೆನಂ.39ರಲ್ಲಿ 02 ಎಕರೆ 30 ಗುಂಟೆ, ಸರ್ವೆನಂ.40ರಲ್ಲಿ 05 ಎಕರೆ 15 ಗುಂಟೆ, ಸರ್ವೆನಂ. 42/1ಎರಲ್ಲಿ 01 ಎಕರೆ 07 ಗುಂಟೆ, ಸರ್ವೆ ನಂ. 42/ಬಿ1ರಲ್ಲಿ 37 ಗುಂಟೆ, ಸರ್ವೆನಂ. 42/1ಬಿ2ರಲ್ಲಿ 38 ಗುಂಟೆ ಮತ್ತು ಸರ್ವೆನಂ. 42/2ರಲ್ಲಿ $4^1/_2$ ಗುಂಟೆ ಹೀಗೆ ಒಟ್ಟು 11 ಎಕರೆ $11^1/_2$ ಗುಂಟೆ ಹೀಗೆ ಎರಡು ಗ್ರಾಮಗಳಲ್ಲಿ ಒಟ್ಟು 21 ಎಕರೆ $15^1/_2$ ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಅಂದರೆ ರೀಸರ್ಚ್ ಇನ್ಸ್‌ಟಿಟ್ಯೂಟ್ ಇನ್ ಟ್ರೆಡಿಷನಲ್ ಮಥೆಡ್ ಟು ಕರೆಕ್ಟ್ ಅಸ್ಟ್ರಾಲಾಜಿಕಲ್ ಕ್ಯಾಲೆಂಡರ್, ಎ ಟ್ರೆಡಿಷನಲ್ ಅಬ್ಸರ್‌ವೇಟರ್, ಎಜುಕೇಷನಲ್ ಇನ್ಸ್‌ಟಿಟ್ಯೂಟ್, ಸ್ಯಾನ್ಸ್‌ಕ್ರೀಟ್ ಅಂಡ್ ವೇದಿಕ್ ಸ್ಟಡೀಸ್ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮೈಸೂರು ಇವರು ತಮ್ಮ ಪತ್ರ ಸಂಖ್ಯೆ LRF SPL 21/2002-03 ದಿನಾಂಕ 13.6.2006ರಲ್ಲಿ ಪ್ರಸ್ತಾಪಿತ ಗ್ರಾಮಗಳ ಮೇಲ್ಕಂಡ ಸರ್ವೆನಂ. ಗಳಲ್ಲಿ ಒಟ್ಟು 21 ಎಕರೆ $15^1/_2$ ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109(1)(ii)ರ ಪ್ರಕಾರ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಟ್ರಸ್ಟ್ ಡೀಡ್ ಕಾಯ್ದೆಯನ್ವಯ ಬೆಂಗಳೂರು ಉಪ ನೋಂದಣಾಧಿಕಾರಿ ಯವರ ಕಛೇರಿಯಲ್ಲಿ ದಿನಾಂಕ 20.9.2000ರಲ್ಲಿ ನೊಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (PTCL ಕಾಯ್ದೆ 1978) ಕರ್ನಾಟಕ ಭೂಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆ ಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109(1)(ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಭೂಮಿಯನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109 (1)(ii) ಮತ್ತು ಕರ್ನಾಟಕ ಭೂಸುಧಾರಣೆ ತಿದ್ದುಪಡಿ ನಿಯಮಗಳು 1996ರ ನಿಯಮ 38ಬಿ (2)(ಎ) ಮತ್ತು (ಬಿ)ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಭಾರತಿ ಯೋಗಧಾಮ ಸಂಸ್ಥೆ, ಮೈಸೂರು ಇವರು ಮೈಸೂರು ತಾಲ್ಲೂಕು, ಬಂಡಿಪಾಳ್ಯ, ಉತ್ತನಹಳ್ಳಿ ಗ್ರಾಮದ ಸರ್ವೆನಂ. 15/1ರಲ್ಲಿ 01 ಎಕರೆ 17 ಗುಂಟೆ, ಸರ್ವೆನಂ.17ರಲ್ಲಿ 06ಎಕರೆ 26ಗುಂಟೆ, ಸರ್ವೆನಂ.18ರಲ್ಲಿ 23 ಗುಂಟೆ, ಸರ್ವೆನಂ. 19/1ರಲ್ಲಿ 34 ಗುಂಟೆ, ಸರ್ವೆನಂ.19/3ರಲ್ಲಿ 06 ಗುಂಟೆ, ಸರ್ವೆನಂ. 23/2ರಲ್ಲಿ 18 ಗುಂಟೆ ಹೀಗೆ ಒಟ್ಟು 10ಎಕರೆ 04 ಗುಂಟೆ ಹಾಗೂ ಬಂಡಿಪಾಳ್ಯ ಗ್ರಾಮದ ಸರ್ವೆನಂ.39ರಲ್ಲಿ 02 ಎಕರೆ 30 ಗುಂಟೆ, ಸರ್ವೆನಂ.40ರಲ್ಲಿ 05 ಎಕರೆ 15 ಗುಂಟೆ, ಸರ್ವೆನಂ. 42/1ಎರಲ್ಲಿ 01 ಎಕರೆ 07 ಗುಂಟೆ, ಸರ್ವೆ ನಂ. 42/ಬಿ1ರಲ್ಲಿ 37 ಗುಂಟೆ, ಸರ್ವೆನಂ. 42/1ಬಿ2ರಲ್ಲಿ 38 ಗುಂಟೆ ಮತ್ತು ಸರ್ವೆನಂ. 42/2ರಲ್ಲಿ $4^1/_2$ ಗುಂಟೆ ಹೀಗೆ ಒಟ್ಟು 11 ಎಕರೆ $11^1/_2$ ಗುಂಟೆ ಹೀಗೆ ಎರಡು ಗ್ರಾಮಗಳಲ್ಲಿ ಒಟ್ಟು 21ಎಕರೆ $15^1/_2$ ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಅಂದರೆ ರೀಸರ್ಚ್ ಇನ್ಸ್‌ಟಿಟ್ಯೂಟ್ ಇನ್ ಟ್ರೆಡಿಷನಲ್ ಮಥೆಡ್ ಟು ಕರೆಕ್ಟ್ ಅಸ್ಟ್ರಾಲಾಜಿಕಲ್ ಕ್ಯಾಲೆಂಡರ್, ಎ ಟ್ರೆಡಿಷನಲ್ ಅಬ್ಸರ್‌ವೇಟರ್, ಎಜುಕೇಷನಲ್ ಇನ್ಸ್‌ಟಿಟ್ಯೂಟ್, ಸ್ಯಾನ್ಸ್‌ಕ್ರೀಟ್ ಅಂಡ್ ವೇದಿಕ್ ಸ್ಟಡೀಸ್ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1)(ii)ರಡಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷದೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇ.51 ಪೇಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಓಡಿ.ಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1)ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೋತ್ತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನೆ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
8. ಈ ಖರೀದಿಯು ಸ್ವಾಭಾವಿಕವಾಗಿ ಸ್ಥಳೀಯ ಸಂಸ್ಥೆಗಳು ಭೂಸ್ವಾಧೀನ ಕ್ರಯದ ಷರತ್ತುಗಳಿಗೊಳಪಟ್ಟಿದೆ.
9. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1683

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂಸುಧಾರಣೆ)

## ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

**ಸಂಖ್ಯೆ: ಆಸಾನಿ:23:ಬೆಕಂಸೂ:2006, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2006**

**ವಿಷಯ:** ಕರ್ನಾಟಕ ರಾಜ್ಯದ 2006ರ ಸೆಪ್ಟೆಂಬರ್ ಮಾಹೆಯ ಔದ್ಯಮಿಕ ಕಾರ್ಮಿಕರ ಗ್ರಾಹಕರ ಬೆಲೆ ಸೂಚ್ಯಂಕ.

2006ರ ಸೆಪ್ಟೆಂಬರ್ ಮಾಹೆಯ ಕರ್ನಾಟಕ ರಾಜ್ಯದ 16 ಕೇಂದ್ರಗಳ (ರಾಜ್ಯ ಸರಣಿಯ 11 ಕೇಂದ್ರಗಳು ಮತ್ತು ಕೇಂದ್ರ ಸರಣಿಯ 5 ಕೇಂದ್ರಗಳು) ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕ ಮತ್ತು ಅಖಿಲ ಭಾರತ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆಗಳ ಸೂಚ್ಯಂಕಗಳನ್ನು ಈ ಕೆಳಕಂಡಂತೆ ಸೂಚಿಸಲಾಗಿದೆ.

| ಕ್ರ. ಸಂ. | ಕೇಂದ್ರಗಳು | ಪರಿವರ್ತನಾ ಅಪವರ್ತ್ಯ (Linking factor) 1960ರ ಶ್ರೇಣಿ | ಸಾಮಾನ್ಯ ಸೂಚ್ಯಂಕ | |
|---|---|---|---|---|
| | | | ಆಗಸ್ಟ್ 2006 | ಸೆಪ್ಟೆಂಬರ್ 2006 |
| ಅ | ರಾಜ್ಯ ಸರಣಿ: (ಆಧಾರಿತ ವರ್ಷ: 1987-88-100) | | | |
| 1. | ಬಳ್ಳಾರಿ | 7.39 | 312 | 312 |
| 2. | ಭದ್ರಾವತಿ | 9.19 | 324 | 329 |
| 3. | ದಾವಣಗೆರೆ | 8.27 | 323 | 328 |
| 4. | ದಾಂಡೇಲಿ | - | 357 | 356 |
| 5. | ಗುಲ್ಬರ್ಗ | 8.26 | 307 | 310 |
| 6. | ಹರಿಹರ | 8.56 | 300 | 302 |
| 7. | ಹಾಸನ | 9.25 | 310 | 313 |
| 8. | ಮಂಡ್ಯ | 7.92 | 321 | 325 |
| 9. | ಮಂಗಳೂರು | 9.31 | 306 | 311 |
| 10. | ರಾಯಚೂರು | - | 335 | 339 |
| 11. | ತುಮಕೂರು | - | 273 | 273 |
| ಆ | ಕೇಂದ್ರ ಸರಣಿ: (ಆಧಾರಿತ ವರ್ಷ: 2001-100) | (1982ರ ಶ್ರೇಣಿ) | | |
| 12. | ಬೆಂಗಳೂರು | 4.51 | 126 | 127 |
| 13. | ಬೆಳಗಾಂ | 5.02 | 126 | 127 |
| 14. | ಹುಬ್ಬಳ್ಳಿ-ಧಾರವಾಡ | 4.71 | 124 | 125 |
| 15. | ಮಡಿಕೇರಿ | 4.47 (1987-88ರ ಶ್ರೇಣಿ) | 114 | 115 |
| 16. | ಮೈಸೂರು | 2.50 | 123 | 124 |
| | **ಅಖಿಲ ಭಾರತ** | **4.63** | **124** | **125** |

**ಸೂಚನೆ:** 1) ಸೂಚ್ಯಂಕವನ್ನು ಒಂದು ಗೊತ್ತಾದ ಕೇಂದ್ರದಲ್ಲಿ ಕಾಲದಿಂದ ಕಾಲಕ್ಕೆ ಗ್ರಾಹಕರ ಸರಾಸರಿ ಬೆಲೆಯಲ್ಲಿ ಕಂಡುಬರುವ ವ್ಯತ್ಯಾಸವನ್ನು ತಿಳಿಯಲು ಉಪಯೋಗಿಸಬಹುದೇ ವಿನಃ ಸೂಚ್ಯಂಕವನ್ನು ಕೇಂದ್ರದಿಂದ ಕೇಂದ್ರಕ್ಕೆ ಹೋಲಿಸಲಾಗುವುದಿಲ್ಲ.

ನಿಮ್ಮ ನಂಬುಗೆಯ,

ನಿರ್ದೇಶಕರ ಪರವಾಗಿ

**DIRECTORATE OF ECONOMICS AND STATISTICS, BANGALORE-1,**
**Consumer Price Index Numbers for Industrial Workers**

**No. DES 23 PWX 2005** **Month : September 2006**
**State : Karnataka.** **Base : 1987-88=100** **Date : 25-11-2006**

| | Group/Sub-Group | Bell-ary | Bhad--ra-Vathi | Da-van-gere | Dan-deli | Gul-Bar-Ga | Hari-har | Has-san | Man-dya | Man-ga-lore | Rai-chur | Tum-kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD**: | | | | | | | | | | | |
| | (a) Cereals & Products | 381 | 439 | 425 | 386 | 344 | 371 | 365 | 372 | 292 | 338 | 344 |
| | (b) Pulses & Products | 328 | 424 | 405 | 484 | 325 | 386 | 418 | 429 | 402 | 365 | 383 |
| | (c) Oil & Fats | 254 | 274 | 247 | 268 | 250 | 258 | 273 | 287 | 230 | 244 | 257 |
| | (d) Meat, Fish & Eggs | 392 | 433 | 379 | 499 | 429 | 396 | 361 | 390 | 606 | 476 | 366 |
| | (e) Milk & Products | 350 | 282 | 347 | 323 | 312 | 323 | 258 | 342 | 289 | 307 | 281 |
| | (f) Condiments & Spices | 274 | 370 | 386 | 41 | 348 | 309 | 325 | 303 | 292 | 317 | 308 |
| | (g) Vegetables & Fruits | 253 | 280 | 396 | 388 | 323 | 308 | 321 | 328 | 326 | 222 | 387 |
| | (h) Other Food | 302 | 403 | 401 | 366 | 343 | 318 | 340 | 315 | 292 | 337 | 351 |
| | **FOOD GROUP INDEX** | **334** | **382** | **390** | **384** | **334** | **339** | **338** | **357** | **347** | **332** | **335** |
| II. | Pan, Supari, Tobacco & Intoxicants | 323 | 352 | 394 | 330 | 576 | 481 | 374 | 475 | 293 | 365 | 382 |
| III. | Fuel & Light | 374 | 325 | 326 | 460 | 319 | 334 | 354 | 333 | 277 | 481 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 256 | 254 | 230 | 376 | 283 | 266 | 351 | 381 | 243 | 466 | 214 |
| VI. | **Miscellaneous** : | | | | | | | | | | | |
| | (a) Medical Care | 628 | 498 | 390 | 291 | 314 | 268 | 386 | 329 | 364 | 436 | 216 |
| | (b) Education, Recreation & Amusement | 363 | 349 | 517 | 226 | 392 | 483 | 347 | 298 | 434 | 350 | 326 |
| | (c) Transport & Communication | 416 | 445 | 342 | 719 | 595 | 423 | 400 | 567 | 608 | 390 | 440 |
| | (d) Personal Care & effects | 269 | 288 | 263 | 267 | 283 | 252 | 298 | 297 | 273 | 260 | 273 |
| | (e) Others | 355 | 369 | 288 | 448 | 293 | 273 | 272 | 288 | 240 | 466 | 243 |
| | Miscellaneous Group | 392 | 360 | 340 | 351 | 346 | 324 | 329 | 311 | 372 | 378 | 285 |
| | **GENERAL INDEX** | **312** | **329** | **328** | **356** | **310** | **302** | **313** | **325** | **311** | **339** | **273** |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | ... | ... |

P.R. 1684 for Director,

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಅಮಲ್ಜಾರಿ ಆದೇಶ ಸಂಖ್ಯೆ ಸಿ.ಇ.ಪಿ. 47/06-07 ಶ್ರೀ ಮರಿಯಪ್ಪ ಬಿನ್ ಶೆಟ್ಟಪ್ಪ, ತುಮಕೂರು ಇವರ ಸ್ಥಿರಾಸ್ತಿಯನ್ನು ಶ್ರೀಮತಿ ಹೆಚ್.ವಿ. ಕವಿತಾರವರ ಹೆಸರಿಗೆ ಹರಾಜನ್ನು ಖಾಯಂಗೊಳಿಸಿ ಸ್ಥಿರೀಕರಣ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1. ಮಾರಾಟಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ ಸ.ಮಾ/ /2006-07 ದಿನಾಂಕ 31.10.2006.
2. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಶ್ರೀ ಗಾಯತ್ರಿ ಪತ್ತಿನ ಸಹಕಾರ ಸಂಘ ನಿ., ತುಮಕೂರು ಇವರ ಪತ್ರ ದಿನಾಂಕ 31.10.2006.
3. ಶ್ರೀ ಮರಿಯಪ್ಪ ಬಿನ್ ಶೆಟ್ಟಪ್ಪ ಇವರ ಸ್ಥಿರಾಸ್ತಿಯನ್ನು ಹರಾಜಿನಲ್ಲಿ ಬಿಡ್ ಮಾಡಿದ ಶ್ರೀಮತಿ ಹೆಚ್.ವಿ. ಕವಿತಾ ಇವರಿಗೆ ಸ್ಥಿರೀಕರಣ ಮಾಡಲು ತಮ್ಮ ತಕರಾರು ಇಲ್ಲ ಎಂಬುದಾಗಿ ಬರೆದುಕೊಟ್ಟ ಪತ್ರ ದಿನಾಂಕ 6.11.2006.

**ಪ್ರಸ್ತಾವನೆ:**

ಶ್ರೀ ಮರಿಯಪ್ಪ ಬಿನ್ ಶೆಟ್ಟಪ್ಪ ಇವರು ಶ್ರೀ ಗಾಯತ್ರಿ ಪತ್ತಿನ ಸಹಕಾರ ಸಂಘ ನಿ., ತುಮಕೂರು ಈ ಸಂಘದಲ್ಲಿ ಸ್ಥಿರಾಸ್ತಿಯನ್ನು ಆಧಾರ ಮಾಡಿ ಸಾಲ ಪಡೆದು ಸುಸ್ತಿಯಾಗಿರುವ ಹಿನ್ನೆಲೆಯಲ್ಲಿ ಈ ಕಛೇರಿಯಲ್ಲಿ ದಾವಾ ಸಂಖ್ಯೆ 02/06-07 ರ ರೀತ್ಯಾ ದಾವಾ ಹೂಡಿ, ದಿನಾಂಕ 19.6.2006 ರಂದು ಆದೇಶ ಪಡೆಯಲಾಗಿದೆ. ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವನ್ನು ಸಂಘಕ್ಕೆ ಜಮಾ ಆಗದೇ, ಸುಸ್ತಿದಾರರಾದ ಕಾರಣದಿಂದ ಡಿಕ್ರಿ ಹಣವನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ 47/06-07 ಅಮಲ್ಜಾರಿ ಆದೇಶ ದಿನಾಂಕ: 6.9.2006 ರಂದು ಪಡೆದು ಮಾರಾಟಾಧಿಕಾರಿಯವರ ವಶಕ್ಕೆ ನೀಡಲಾಗಿತ್ತು.

ಮಾರಾಟಾಧಿಕಾರಿಗಳು ನಿಯಮಾನುಸಾರ ಅಮಲ್ಜಾರಿ ಕ್ರಮ ತೆಗೆದುಕೊಂಡು ಸಾಲಗಾರರ ಸ್ಥಿರಾಸ್ತಿಯನ್ನು ದಿನಾಂಕ: 27.10.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜಿಗೆ ಗುರಿಪಡಿಸಿಲಾಗಿದ್ದು, ಸದರಿ ಹರಾಜಿನ ದಿನಾಂಕ ಸಂಘಕ್ಕೆ ಸುಸ್ತಿ ಸಾಲಗಾರರಿಂದ ಒಟ್ಟು ರೂ. 2,85,99.00 ಗಳು ಬಾಕಿಯಿರುವುದಾಗಿ ತಿಳಿಸಿದ್ದು, ಸದರಿ ಹರಾಜಿನಲ್ಲಿ 3 ಜನ ಭಾಗಹಿಸಿ, ಆ ಪೈಕಿ ಶ್ರೀಮತಿ ಹೆಚ್.ವಿ. ಕವಿತಾ ಕೋಂ ಸಿ ವೆಂಕಟೇಶ್, ಯಮುನಲ್ ಪೌಲ್ಟಿ ಫಾರಂ ಕಾಂಪೌಂಡ್, 1ನೇ ಮಹಡ, ದೇವಸಂದ್ರ, ಕೆ.ಆರ್. ಪುರಂ, ಬೆಂಗಳೂರು ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ. 4,46,000.00 ಗಳಿಗೆ ಕೂಗಿರುವುದರಿಂದ ಸಾಲಗಾರರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38 (6) (A) ರನ್ವಯ ಶ್ರೀಮತಿ ಹೆಚ್.ವಿ. ಕವಿತಾ ಕೋಂ ಸಿ. ವೆಂಕಟೇಶ್, ಯಮುನಲ್ ಪೌಲ್ಟಿ ಫಾರಂ ಕಾಂಪೌಂಡ್, 1ನೇ ಮಹಡಿ, ದೇವಸಂದ್ರ, ಕೆ.ಆರ್. ಬಡಾವಣೆ, ಬೆಂಗಳೂರು ಇವರಿಗೆ ಸದರಿ ಹರಾಜನ್ನು ಖಾಯಂಗೊಳಿಸಿ ಆದೇಶ ನೀಡಲು ಉಲ್ಲೇಖ (1) ಮತ್ತು (2)ರಲ್ಲಿ ನಮೂದಿಸಿರುವ ಪತ್ರಗಳಲ್ಲಿ ಕೋರಿರುತ್ತಾರೆ. ಪ್ರಯುಕ್ತ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ ಸಂಖ್ಯೆ: ಎ.ಆರ್.ಟಿ/.ಎ.ಬಿ.ಎನ್.ಸ್ಥಿ.ಅ/12/06-07, ದಿನಾಂಕ: 10ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬಿ. ಜಯಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) ಅನ್ವಯ ದತ್ತವಾಗಿರುವ ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿ.ಎಂ.ಡಬ್ಲ್ಯೂ. ಸಿ.ಎಲ್.ಎಂ. 2005 ದಿನಾಂಕ: 21.8.2006 ರನ್ವಯ ಪ್ರತ್ಯಾಯೋಜಿಸಲ್ಪಟ್ಟಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ: 47/06-07 ಶ್ರೀ ಮರಿಯಪ್ಪ ಬಿನ್ ಶೆಟ್ಟಪ್ಪ ತುಮಕೂರು ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 27.10.2006 ರಂದು ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಇವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀಮತಿ ಹೆಚ್.ವಿ. ಕವಿತಾ ಕೋಂ ಸಿ. ವೆಂಕಟೇಶ್, ಯಮುನಲ್ ಪೌಲ್ಟಿ ಫಾರಂ ಕಾಂಪೌಂಡ್, 1ನೇ ಮಹಡಿ, ದೇವಸಂದ್ರ, ಕೆ.ಆರ್. ಬಡಾವಣೆ , ಬೆಂಗಳೂರು ಇವರು ಅತೀ ಹೆಚ್ಚಿನ ಬಿಡ್ಡುದಾರರು, ಇವರಿಗೂ ರೂ. 4,46,000-00 (ನಾಲ್ಕು ಲಕ್ಷದ ನಲವತ್ತಾರು ಸಾವಿರ ರೂ.ಗಳಿಗೆ ಮಾತ್ರ) ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ. ಸಂಘಕ್ಕೆ ಬಾಕಿಯಿರುವ ಮೊತ್ತನ್ನು ಕಳೆದು, ಬಾಕಿ ಉಳಿಯುವ ಮೊತ್ತವನ್ನು ಮೂಲ ಸಾಲಗಾರರಿಗೆ ಪಾವತಿ ಮಾಡತಕ್ಕದ್ದು.

**ಸ್ಥಿರಾಸ್ತಿಯ ವಿವರಗಳು**

ತುಮಕೂರು ನಗರ ಎಸ್.ಎಸ್. ಪುರಂ (ಎಸ್.ಐ.ಟಿ. ಬಡಾವಣೆ) ಗೋಕುಲ ರಸ್ತೆ, 1ನೇ ಕ್ರಾಸ್‌ನಲ್ಲಿರುವ ಮುನಿಸಿಪಲ್ ಖಾತೆ ನಂ. 5390 ಚಾಲ್ತಿ ಖಾತಾ ನಂ. 1332-1557 ವುಳ್ಳ ಸ್ವತ್ತಿನ ಅಳತೆ ಪೂರ್ವ ಪಶ್ಚಿಮ ಉತ್ತರದ ಕಡೆ 56 ಅಡಿ (ಐವತ್ತಾರು ಅಡಿ)ಗಳು, ದಕ್ಷಿಣದ ಕಡೆ 46 (ನಲವತ್ತಾರು) ಅಡಿ, ಉತ್ತರ ದಕ್ಷಿಣ ಪೂರ್ವದ ಕಡೆ 22.5 ಅಡಿ (ಇಪ್ಪತ್ತೆರಡುವರೆ ಅಡಿ) ಪಶ್ಚಿಮದ ಕಡೆ 15 (ಹದಿನೈದು ಅಡಿ) ಅಡಿಗಳುಳ್ಳ ಸೈಟ್ ಹಾಗೂ ಮನೆ ಸಹ ಇರುವ ಸ್ವತ್ತಿಗೆ ಸೇರಿದೆ. ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ ಮುನಿಸಿಪಲ್ ರಸ್ತೆ, ಪಶ್ಚಿಮಕ್ಕೆ ನನ್ನ ಬಾಬ್ತು ಸ್ವತ್ತು, ಉತ್ತರಕ್ಕೆ ನನ್ನ ಬಾಬ್ತು ಸ್ವತ್ತು, ದಕ್ಷಿಣಕ್ಕೆ ರಾಮಚಂದ್ರಪ್ಪನವರ ಬಾಬ್ತು ಸ್ವತ್ತು ಈ ಮಧ್ಯ ಇರುವ ಸ್ವತ್ತು ಮಾರಾಟದ ಮೊಬಲಗು ರೂ. 4,46,000.00 ಗಳು ಮಾರಾಟದ ದಿನಾಂಕ: 25.8.2006.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 10.11.2006 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಕರ್ನಾಟಕ ಸಹಕಾರ ಸಂಘಗಳ 1960ರ ನಿಯಮ 38 (7) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಮಾರಾಟದ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತಿನ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿದ ಸ್ಥಿರೀಕರಣ ಪ್ರಮಾಣ ಪತ್ರ**

ಶ್ರೀ ಮರಿಯಪ್ಪ ಬಿನ್ ಶೆಟ್ಟಪ್ಪ, ತುಮಕೂರು ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70 ರನ್ವಯ ಆದೇಶವನ್ನು ಕಲಂ 101 ರೀತ್ಯಾ ಜಾರಿಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ: 10.11.2006 ರಂದು ಈ ಕಚೇರಿಯ ಆದೇಶದಡಿಯಲ್ಲಿ ಶ್ರೀಮತಿ ಹೆಚ್.ವಿ. ಕವಿತಾ ಕೋಂ ಸಿ. ವೆಂಕಟೇಶ್, ಯಮುನಲ್ ಪಾಲ್ಟಿ ಫಾರಂ ಕಾಂಪೌಂಡ್, 1ನೇ ಮಹಡಿ, ದೇವಸಂದ್ರ, ಕೆ.ಆರ್. ಬಡಾವಣೆ, ಬೆಂಗಳೂರು ಇವರ ಹೆಸರಿಗೆ ಹರಾಜನ್ನು ಖಾಯಂ ಮಾಡಿ, ಸ್ಥಿರೀಕರಣ ಆದೇಶ ನೀಡಿದೆ. ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕುಸ್ವಾಮ್ಯ ಅಧಿಕಾರ ನಾಮ ಮತ್ತು ಬಾಧ್ಯತೆ ಶ್ರೀಮತಿ ಹೆಚ್.ವಿ. ಕವಿತ ಕೋಂ ಸಿ. ವೆಂಕಟೇಶ್ ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಪ್ರಮಾಣ ಪತ್ರ ನೀಡಿದೆ.

**ಸ್ವತ್ತಿನ ವಿವರಗಳು**

ತುಮಕೂರು ನಗರ ಎಸ್.ಎಸ್. ಪುರಂ (ಎಸ್.ಐ.ಟಿ. ಬಡಾವಣೆ) ಗೋಕುಲ ರಸ್ತೆ, 1ನೇ ಕ್ರಾಸ್‌ನಲ್ಲಿರುವ ಮುನಿಸಿಪಲ್ ಖಾತೆ ನಂ. 5390 ಚಾಲ್ತಿ ಖಾತಾ ನಂ. 1332-1557 ವುಳ್ಳ ಸ್ವತ್ತಿನ ಅಳತೆ ಪೂರ್ವ ಪಶ್ಚಿಮ ಉತ್ತರದ ಕಡೆ 56 ಅಡಿ (ೖವತ್ತಾರು ಅಡಿ) ಗಳು, ದಕ್ಷಿಣದ ಕಡೆ 46 (ನಲವತ್ತಾರು) ಅಡಿ, ಉತ್ತರ ದಕ್ಷಿಣ ಪೂರ್ವದ ಕಡೆ 22.5 ಅಡಿ (ಇಪ್ಪತ್ತೆರಡುವರೆ ಅಡಿ) ಪಶ್ಚಿಮದ ಕಡೆ 15 (ಹದಿನೈದು ಅಡಿ) ಅಡಿಗಳುಳ್ಳ ಸೈಟ್ ಹಾಗೂ ಮನೆ ಸಹ ಇರುವ ಸ್ವತ್ತಿಗೆ ಸೇರಿದೆ. ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ ಮುನಿಸಿಪಲ್ ರಸ್ತೆ, ಪಶ್ಚಿಮಕ್ಕೆ ನನ್ನ ಬಾಬ್ತು ಸ್ವತ್ತು, ಉತ್ತರಕ್ಕೆ ನನ್ನ ಬಾಬ್ತು ಸ್ವತ್ತು, ದಕ್ಷಿಣಕ್ಕೆ ರಾಮಚಂದ್ರಪ್ಪನವರ ಬಾಬ್ತು ಸ್ವತ್ತು ಈ ಮಧ್ಯ ಇರುವ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್. 1686

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಆದೇಶ ಸಂಖ್ಯೆ 135/2005-06 ಶ್ರೀ ಮರಿಯಪ್ಪ ಬಿನ್ ಲೇಟ್ ದಾಸಪ್ಪ, ತುಮಕೂರು ಇವರ ಸ್ಥಿರಾಸ್ತಿಯನ್ನು ಶ್ರೀ ಟಿ.ಕೆ. ನರಸಿಂಹಮೂರ್ತಿ ಬಿನ್ ಕುಂಭಯ್ಯ, ಭಾಗ್ಯನಗರ, ತುಮಕೂರು ಇವರ ಹೆಸರಿಗೆ ಖಾಯಂ ಮಾಡಿ ಸ್ಥಿರೀಕರಣ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1. ಮಾರಾಟಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ ಸ.ಸಂ.ಮಾ.ಅ./2/2006-07 ದಿನಾಂಕ 11.9.2006, 5.10.2006.
2. ಕಾಯದರ್ಶಿ, ಶ್ರೀ ಶಂಕರಿ ಪತ್ತಿನ ಸಹಕಾರ ಸಂಘ ನಿ., ತುಮಕೂರು ಇವರ ಪತ್ರ ಸಂಖ್ಯೆ 46/06-07 ದಿನಾಂಕ 5.10.2006.
3. ಸ್ಥಿರಾಸ್ತಿಯನ್ನು ಅಂತಿಮ ಬಿಡ್‌ದಾರರಿಗೆ ಸ್ಥಿರೀಕರಿಸುವುದಕ್ಕೆ ತಮ್ಮ ತಕರಾರು ಇಲ್ಲ ಎಂಬುದಾಗಿ ಶ್ರೀ ಮರಿಯಪ್ಪ ಬಿನ್ ಲೇಟ್ ದಾಸಪ್ಪ ಇವರ ಪತ್ರ ದಿನಾಂಕ 6.11.2006.

**ಪ್ರಸ್ತಾವನೆ:**

ಶ್ರೀ ಮರಿಯಪ್ಪ ಬಿನ್ ಲೇಟ್ ದಾಸಪ್ಪ ಇವರು ಶ್ರೀ ಶಂಕರಿ ಪತ್ತಿನ ಸಹಕಾರ ಸಂಘ ನಿ., ತುಮಕೂರು ಈ ಸಂಘದಲ್ಲಿ ಸಾಲ ಪಡೆದು ಅಸಲು, ಬಡ್ಡಿ ಮತ್ತು ಇತರೆ ಖರ್ಚು ಒಟ್ಟು ರೂ. 1,20,020.00 ಗಳಿಗೆ ಸುಸ್ತಿಯಾಗಿದ್ದು, ವಸೂಲಾತಿಗಾಗಿ ಮುಖ್ಯಕಾರ್ಯನಿರ್ವಹಣಾಧಿಕಾರಿ ಶ್ರೀ ಶಂಕರಿ ಪತ್ತಿನ ಸಹಕಾರ ಸಂಘ ನಿ., ತುಮಕೂರು ಇವರು ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1950 ಕಲಂ 70ರ ಅಡಿಯಲ್ಲಿ ದಾವೆಯನ್ನು ಹೂಡಿದ್ದು ಈ ದಾವಾ ಸಂಖ್ಯೆ ಎ.ಆರ್.ಟಿ/54/05-06 ದಿನಾಂಕ: 29.9.2005 ರಂದು ಡಿಕ್ರಿ ಆದೇಶ ಪಡೆಯಲಾಗಿದೆ. ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವನ್ನು ಸಂಘಕ್ಕೆ ಜಮಾ ಆಗದೇ ಸುಸ್ತಿದಾರರಾದ ಕಾರಣದಿಂದ ಡಿಕ್ರಿ ಹಣವನ್ನು ಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ 135/2005-06 ರೀತ್ಯಾ 28.12.2005 ರಂದು ಪಡೆದು ಮಾರಾಟಾಧಿಕಾರಿಯರ ವಶಕ್ಕೆ ನೀಡಲಾಗಿತ್ತು ಮಾರಾಟಾಧಿಕಾರಿಗಳು ನಿಯಮಾನುಸಾರ ಅಮಲ್ಜಾರಿ ಕ್ರಮ ತೆಗೆದುಕೊಂಡ ಸುಸ್ತಿಸಾಲಗಾರರ ಸ್ಥಿರಾಸ್ತಿಯನ್ನು ದಿನಾಂಕ 25.8.2006 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದ್ದು ಹರಾಜಿನ ದಿನಾಂಕ ಸಂಘಕ್ಕೆ ಸುಸ್ತಿ ಸಾಲಗಾರರಿಂದ ಒಟ್ಟು ರೂ. 1,42,700.00 ಗಳು ಬಾಕಿ ಇರುವುದಾಗಿ ಸಂಘದ ಕಾರ್ಯದರ್ಶಿಯವರು ತಿಳಿಸಿರುತ್ತಾರೆ.

ಸದರಿ ಹರಾಜಿನಲ್ಲಿ ಶ್ರೀ ಟಿ.ಕೆ. ನರಸಿಂಹಮೂರ್ತಿ ಬಿನ್ ಟಿ.ಎಸ್. ಕುಂಭಯ್ಯ, ಭಾಗ್ಯನಗರ ತುಮಕೂರು ಇವರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ.5,20,000.00 ಗಳಿಗೆ ಕೂಗಿರುವುದರಿಂದ ಸಾಲಗಾರರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ 38 (7) ರನ್ವಯ ಶ್ರೀ ಟಿ.ಕೆ. ನಸಿಂಹಮೂರ್ತಿ ಬಿನ್ ಕುಂಭಯ್ಯ, ಭಾಗ್ಯನಗರ, ತುಮಕೂರು ಇವರಿಗೆ ಸದರಿ ಹರಾಜನ್ನು ಖಾಯಂ ಮಾಡಿ ಸ್ಥಿರೀಕರಣ ಆದೇಶ ನೀಡಲು ಉಲ್ಲೇಖ (1) ಮತ್ತು (2) ರಲ್ಲಿ ನಮೂದಿಸಿ ಪತ್ರಗಳಲ್ಲಿ ಕೋರಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ ಸಂಖ್ಯೆ: ಎ.ಆರ್.ಟಿ/ಎ.ಬಿ.ಎನ್.ಸ್ಥಿ.ಅ/11/06-07, ದಿನಾಂಕ: 9ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬಿ. ಜಯಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) ಅನ್ವಯ ದತ್ತವಾಗಿರುವ ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿ.ಎಂ.ಡಬ್ಲ್ಯೂ. ಸಿ.ಎಲ್.ಎಂ. 2005 ದಿನಾಂಕ: 21.8.2006 ರನ್ವಯ ಪ್ರತ್ಯಾಯೋಜಿಸಲ್ಪಟ್ಟಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ: 135/05-06 ಶ್ರೀ ಮರಿಯಪ್ಪ ಬಿನ್ ದಾಸಪ್ಪ ತುಮಕೂರು ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 25.8.2006 ರಂದು ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಇವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಟಿ.ಕೆ. ನರಸಿಂಹಮೂರ್ತಿ ಬಿನ್ ಕುಂಭಯ್ಯ, ಭಾಗ್ಯನಗರ, ತುಮಕೂರು ಇವರು ಅತೀ ಹೆಚ್ಚಿನ ಬಿಡ್ಡುದಾರರು, ಇವರಿಗೂ ರೂ. 5,20,000-00 (ಐದು ಲಕ್ಷದ ಇಪ್ಪತ್ತು ಸಾವಿರ ರೂ.ಗಳಿಗೆ ಮಾತ್ರ) ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ. ಸಂಘಕ್ಕೆ ಬಾಕಿಯಿರುವ ಮೊತ್ತನ್ನು ಕಳೆದು, ಬಾಕಿ ಉಳಿಯುವ ಮೊತ್ತವನ್ನು ಮೂಲ ಸಾಲಗಾರರಿಗೆ ಪಾವತಿ ಮಾಡತಕ್ಕದ್ದು.

**ಸ್ಥಿರಾಸ್ತಿಯ ವಿವರಗಳು**

ತುಮಕೂರು ನಗರ ವಿದ್ಯಾನಗರ ಬಡಾವಣೆ ಮುನಿಸಿಪಲ್ ಖಾತೆ ನಂ. 701/479 ವುಳ್ಳ ಪೂರ್ವ ಪಶ್ಚಿಮ 62 ಅಡಿಗಳು ಉತ್ತರ ದಕ್ಷಿಣ 69 ಅಡಿಗಳುಳ್ಳ ಸ್ವತ್ತು ಮತ್ತು ಸ್ವತ್ತಿನಲ್ಲಿ ನಾಲ್ಕು ಚದುರ ಶೀಟಿನ ಮನೆ ಸೇರಿ ಚಕ್ಕುಬಂದಿ ಪೂರ್ವಕ್ಕೆ ವೆಂಕಟಪ್ಪನವರ ಸ್ವತ್ತು, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಕೆ. ಮಲ್ಲಣ್ಣನವರ ಸೈಟು, ದಕ್ಷಿಣಕ್ಕೆ ಈಶ್ವರ ಮೊದಲಿಯಾರ್‌ರ ಸ್ವತ್ತು ಈ ಮಧ್ಯ ಇರುವ ಸ್ವತ್ತು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 9.11.2006 ರಂದು ನೀಡಲಾಗಿದೆ.

**ಬಿ. ಜಯಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಕರ್ನಾಟಕ ಸಹಕಾರ ಸಂಘಗಳ 1960ರ ನಿಯಮ 38 (7) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಮಾರಾಟದ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತಿನ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿದ ಸ್ಥಿರೀಕರಣ ಪ್ರಮಾಣ ಪತ್ರ**

ಶ್ರೀ ಮರಿಯಪ್ಪ ಬಿನ್ ಲೇಟ್ ದಾಸಪ್ಪ, ತುಮಕೂರು ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70 ರನ್ವಯ ಆದೇಶವನ್ನು ಕಲಂ 101 ರೀತ್ಯಾ ಜಾರಿಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ: 9.11.2006 ರಂದು ಈ ಕಚೇರಿಯ ಆದೇಶದಡಿಯಲ್ಲಿ ಶ್ರೀ ಟಿ.ಕೆ. ನರಸಿಂಹಮೂರ್ತಿ ಬಿನ್ ಕುಂಬಯ್ಯ ಭಾಗ್ಯನಗರ, ತುಮಕೂರು ಇವರ ಹೆಸರಿಗೆ ಹರಾಜನ್ನು ಖಾಯಂ ಮಾಡಿ, ಸ್ಥಿರೀಕರಣ ಆದೇಶ ನೀಡಿದೆ. ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕುಸ್ವಾಮ್ಯ ಅಧಿಕಾರ ನಾಮ ಮತ್ತು ಬಾಧ್ಯತೆ ಶ್ರೀ ಟಿ.ಕೆ. ನರಸಿಂಹಮೂರ್ತಿ ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ರನ್ವಯ ಪ್ರಮಾಣ ಪತ್ರ ನೀಡಿದೆ.

**ಸ್ವತ್ತಿನ ವಿವರಗಳು**

ತುಮಕೂರು ನಗರ ವಿದ್ಯಾನಗರ ಬಡಾವಣೆಯ ಮುನಿಸಿಪಲ್ ಖಾತೆ ನಂ. 701/479 ವುಳ್ಳ ಪೂರ್ವ ಪಶ್ಚಿಮ 62 ಅಡಿಗಳು, ಉತ್ತರ ದಕ್ಷಿಣ 69 ಅಡಿವುಳ್ಳ ಸ್ವತ್ತು ಮತ್ತು ಸ್ವತ್ತಿನಲ್ಲಿ ನಾಲ್ಕು ಚದುರ ಶೀಟಿನ ಮನೆ ಸೇರಿ ಚಕ್ಕುಬಂದಿ ಪೂರ್ವಕ್ಕೆ ವೆಂಕಟಪ್ಪನವರ ಸ್ವತ್ತು, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಕೆ. ಮಲ್ಲಪ್ಪನವರ ಸ್ವತ್ತು ದಕ್ಷಿಣಕ್ಕೆ ಈಶ್ವರ ಮೊದಲಿಯಾರ್‌ರ ಸ್ವತ್ತು ಈ ಮಧ್ಯ ಇರುವ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 1687 ತುಮಕೂರು ಉಪವಿಭಾಗ, ತುಮಕೂರು.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003 - Clarification under Section 59(4) regarding rate of resale tax applicable on "Maize based products".

**Ref:** Application dated 11.10.2006 of M/s Kunal Agencies, No. 23/175, "Bharat Complex", A.S. Char Street, Bangalore.

In its application cited at reference above, the applicant has sought clrification regarding rate of resale tax applicable on "maize based products".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaing uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.147/06-07, Dated: 16th November 2006**

It is hereby clarified that as per sl.no. 15 of Notification No. FD 54 CSL 2002(4), dated 30.3.2002, there is no resale tax on "maize based products", during the years 2002-03 and 2003-04.

**B.A. HARISH GOWDA**
P.R. 1690 Commissioner of Commercial Taxes,
(Karnataka), Bangalore.

## ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ರೈಲ್ವೆ ಸಮಾನಾಂತರ ರಸ್ತೆ, ಗಾಂಧಿನಗರ, ತುಮಕೂರು-572101

**ಮರಳು ಹರಾಜು ಅಧಿಸೂಚನೆ**

**ಸಂಖ್ಯೆ:ಗಭೂಇ:ಉನಿತು/ಮರಳು ಹರಾಜು/06-07, ದಿನಾಂಕ: 20ನೇ ನವೆಂಬರ್ 2006**

ಮಾನ್ಯ ಜಿಲ್ಲಾಧಿಕಾರಿಯವರು, ತುಮಕೂರು ಜಿಲ್ಲೆ ಇವರ ದಿನಾಂಕ: 13.11.2006 ಮತ್ತು 14.11.2006ರ ಅನುಮೋದನೆಯಂತೆ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಗೌಡಗೆರೆ ಹೋಬಳಿ ಡ್ಯಾಗೇರಹಳ್ಳಿ (ಮಜರೆ ಹೇರೂರಹಳ್ಳಿ) ಮತ್ತು ಚಿಕ್ಕನಕೋಟೆ ಗ್ರಾಮಗಳ ಹಳ್ಳ ಪಾತ್ರದಲ್ಲಿ ದೊರೆಯುವ ಸಾಧಾರಣ ಮರಳನ್ನು ಹಾಗೂ ಕೊರಟಗೆರೆ ತಾಲ್ಲೂಕಿನ ಕೋಳಾಲ ಹೋಬಳಿ ಇರಕಸಂದ್ರ ಕಾಲೋನಿಯ ಹತ್ತಿರ ಇಟ್ಟಿಗೆ ಫ್ಯಾಕ್ಟರಿ ಹತ್ತಿರ ಕೆರೆ ಅಂಗಳದಲ್ಲಿ ಅಕ್ರಮವಾಗಿ ಕಾರ್ಯನಿರ್ವಹಿಸಿ ಅಕ್ರಮವಾಗಿ ಸಂಗ್ರಹಿಸಿರುವ ಮಣ್ಣು ಮಿಶ್ರಿತ ಮರಳಿನ ದಾಸ್ತಾನನ್ನು "ಎಲ್ಲಿದೆಯೋ ಹಾಗೆ" "ಹೇಗಿದೆಯೋ ಹೇಗೆ" ಹರಾಜು ಪ್ರಕ್ರಿಯೆ ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜಿಗಿಟ್ಟಿರುವ ಬ್ಲಾಕ್‌ಗಳು ಮತ್ತು ಹರಾಜಿಗಿಟ್ಟಿರುವ ದಾಸ್ತಾನಿನ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ಗ್ರಾಮದ ಹೆಸರು | ತಾಲ್ಲೂಕ್ | ಬ್ಲಾಕ್ ನಂ. | ವಿಸ್ತೀರ್ಣ ಎಕರೆ-ಗುಂಟೆ | ಇ.ಎಂ.ಡಿ. (ಭದ್ರತಾ ಠೇವಣಿ) ರೂ. | ಚೆಕ್ಕು ಬಂದಿ |
|---|---|---|---|---|---|---|
| 1 | ಡ್ಯಾಗೇರಹಳ್ಳಿ (ಮಜರೆ ಹೇರೂರಹಳ್ಳಿ) | ಶಿರಾ | 1 | 1-00 | 1000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.56, ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.57 ಪೂರ್ವ:ನಾಲಾಪಾತ್ರ ಮತ್ತು ಬ್ಲಾಕ್ ನಂ.2 ಪಶ್ಚಿಮ:ನಾಲಾಪಾತ್ರ |
| 2 | ಡ್ಯಾಗೇರಹಳ್ಳಿ (ಮಜರೆ ಹೇರೂರಹಳ್ಳಿ) | ಶಿರಾ | 2 | 1-15 | 1375/- | ಉತ್ತರ:ನಾಲಾಪಾತ್ರ, ದಕ್ಷಿಣ:ನಾಲಾಪಾತ್ರ ಮತ್ತು ಬ್ಲಾಕ್ ನಂ.3, ಪೂರ್ವ:ನಾಲಾಪಾತ್ರ ಪಶ್ಚಿಮ:ನಾಲಾಪಾತ್ರ ಮತ್ತು ಬ್ಲಾಕ್ ನಂ.1. |
| 3 | ಡ್ಯಾಗೇರಹಳ್ಳಿ (ಮಜರೆ ಹೇರೂರಹಳ್ಳಿ) | ಶಿರಾ | 3 | 1-10 | 1250/- | ಉತ್ತರ:ನಾಲಾಪಾತ್ರ ಮತ್ತು ಬ್ಲಾಕ್ ನಂ.2 ದಕ್ಷಿಣ:ನಾಲಾಪಾತ್ರ, ಪೂರ್ವ:ನಾಲಾಪಾತ್ರ ಪಶ್ಚಿಮ:ನಾಲಾಪಾತ್ರ |

| ಕ್ರ. ಸಂ. | ಗ್ರಾಮದ ಹೆಸರು | ತಾಲ್ಲೂಕ್ | ಬ್ಲಾಕ್ ನಂ. | ವಿಸ್ತೀರ್ಣ ಎಕರೆ-ಗುಂಟೆ | ಇ.ಎಂ.ಡಿ. (ಭದ್ರತಾ ಠೇವಣಿ) ರೂ. | ಚೆಕ್ಕು ಬಂದಿ |
|---|---|---|---|---|---|---|
| 4 | ಚಿಕ್ಕನಕೋಟೆ | ಶಿರಾ | 1 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.7,61,62 ದಕ್ಷಿಣ:ನಾಲಾಪಾತ್ರ ಮತ್ತು ಬಿದರೆಕೇರಿಗಡಿ ಪೂರ್ವ:ನಾಲಾಪಾತ್ರ, ಪಶ್ಚಿಮ:ನಾಲಾಪಾತ್ರ ಮತ್ತು ಬ್ಲಾಕ್ ನಂ.2 |
| 5 | ಚಿಕ್ಕನಕೋಟೆ | ಶಿರಾ | 2 | 3-00 | 3000/- | ಉತ್ತರ:ನಾಲಾಪಾತ್ರ ಮತ್ತು ಬ್ಲಾಕ್ ನಂ.3 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿಗಡಿ, ಪೂರ್ವ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.62, ಪಶ್ಚಿಮ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿಗಡಿ |
| 6 | ಚಿಕ್ಕನಕೋಟೆ | ಶಿರಾ | 3 | 3-00 | 3000/- | ಉತ್ತರ:ನಾಲಾಪಾತ್ರ ಮತ್ತು ಬ್ಲಾಕ್ ನಂ.4 ದಕ್ಷಿಣ:ಬ್ಲಾಕ್ ನಂ.2, ಪೂರ್ವ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.65 & 125, ಪಶ್ಚಿಮ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ. |
| 7 | ಚಿಕ್ಕನಕೋಟೆ | ಶಿರಾ | 4 | 5-00 | 5000/- | ಉತ್ತರ:ಬ್ಲಾಕ್ ನಂ.5 ದಕ್ಷಿಣ:ಬ್ಲಾಕ್ ನಂ.5 ಪೂರ್ವ:ನಾಲಾಪಾತ್ರ ಮತ್ತು ಪಕ್ಕದ ಸ.ನಂ. 67,68 ಮತ್ತು 125 ರಿಂದ 127 ಪಶ್ಚಿಮ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ. |
| 8 | ಚಿಕ್ಕನಕೋಟೆ | ಶಿರಾ | 5 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.68,70,71 & 78, ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ., ಪೂರ್ವ:ನಾಲಾಪಾತ್ರ ಮತ್ತು ಪಕ್ಕದ ಸ.ನಂ. 68, ಪಶ್ಚಿಮ:ಬ್ಲಾಕ್ ನಂ.6 |
| 9 | ಚಿಕ್ಕನಕೋಟೆ | ಶಿರಾ | 6 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.78,80 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ, ಪೂರ್ವ:ಬ್ಲಾಕ್ ನಂ.5, ಪಶ್ಚಿಮ: ಬ್ಲಾಕ್ ನಂ.7 |
| 10 | ಚಿಕ್ಕನಕೋಟೆ | ಶಿರಾ | 7 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.82 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ. ಪೂರ್ವ:ಬ್ಲಾಕ್ ನಂ.6, ಪಶ್ಚಿಮ: ಬ್ಲಾಕ್ ನಂ.8 |
| 11 | ಚಿಕ್ಕನಕೋಟೆ | ಶಿರಾ | 8 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.82,83 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ, ಪೂರ್ವ:ಬ್ಲಾಕ್ ನಂ.7, ಪಶ್ಚಿಮ: ಬ್ಲಾಕ್ ನಂ.9 |
| 12 | ಚಿಕ್ಕನಕೋಟೆ | ಶಿರಾ | 9 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.83,84,85 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ ಪೂರ್ವ: ಬ್ಲಾಕ್ ನಂ.8, ಪಶ್ಚಿಮ: ಬ್ಲಾಕ್ ನಂ.10 |
| 13 | ಚಿಕ್ಕನಕೋಟೆ | ಶಿರಾ | 10 | 5-00 | 5000/- | ಉತ್ತರ:ನಾಲಾಪಾತ್ರ ಮತ್ತು ಪಕ್ಕದ ಸ.ನಂ.85,88 ದಕ್ಷಿಣ:ನಾಲಾಪಾತ್ರ ಮತ್ತು ಪಕ್ಕದ ಗ್ರಾಮ ಬಿದರೆಕೇರಿ, ಪೂರ್ವ:ಬ್ಲಾಕ್ ನಂ.9, ಪಶ್ಚಿಮ:ನಾಲಾಪಾತ್ರ |

**ಅಕ್ರಮವಾಗಿ ಮರಳು ದಾಸ್ತಾನು ಮಾಡಿರುವ ವಿವರ:**

| ಕ್ರ. ಸಂ. | ತಾಲ್ಲೂಕು | ಮರಳು ದಾಸ್ತಾನಿನ ಪ್ರದೇಶದ ವಿವರ | ಮಣ್ಣು ಮಿಶ್ರಿತ ಸಾಧಾರಣ ಮರಳಿನ ಅಂದಾಜು ಪ್ರಮಾಣ ಮೆ.ಟನ್ನುಗಳಲ್ಲಿ | ಭದ್ರತಾ ಠೇವಣಿ (ಇ.ಎಂ.ಡಿ.) ರೂ. | ಚೆಕ್ಕುಬಂದಿ |
|---|---|---|---|---|---|
| 1 | ಕೊರಟಗೆರೆ | ಕೋಳಾಲ ಹೋಬಳಿ ಇರಕಸಂದ್ರ ಕಾಲೋನಿ ಹತ್ತಿರ ಇಟ್ಟಿಗೆ ಫ್ಯಾಕ್ಟರಿ ಹತ್ತಿರ ಕೆರೆ ಅಂಗಳಲ್ಲಿ | 400 ಮೆಟ್ರಿಕ್ ಟನ್ನುಗಳಲ್ಲಿ | 10,000/- | ಪೂರ್ವ: ಕೆರೆ ಅಂಗಳ ಪಶ್ಚಿಮ: ಕೆರೆ ಅಂಗಳ ಉತ್ತರ: ಕೆರೆ ಅಂಗಳ ದಕ್ಷಿಣ: ಕೆರೆ ಅಂಗಳ: |

ಮೇಲೆ ತಿಳಿಸಿದ ಸಾಧಾರಣ ಮರಳಿನ ಬಹಿರಂಗ ಹರಾಜು ಪ್ರಕ್ರಿಯೆಯನ್ನು ಶಿರಾ ತಾಲ್ಲೂಕ್ ಮತ್ತು ಕೊರಟಗೆರೆ ತಾಲ್ಲೂಕಿನ ತಹಶೀಲ್ದಾರ್ ರವರ ಕಛೇರಿಗಳಲ್ಲಿ ಸಂಬಂಧಿಸಿದ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಸಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಹರಾಜಿಗೆ ನಿಬಂಧನೆ ಹಾಗೂ ಇತರೆ ವಿವರಗಳನ್ನು ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು ಇವರಿಂದ ಪಡೆಯಬಹುದು. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿಗೆ ಇಟ್ಟಿರುವ ಪ್ರದೇಶಗಳನ್ನು ಮತ್ತು ಸಂಗ್ರಹಿಸಿರುವ ಮರಳು ಪ್ರದೇಶವನ್ನು ಖಾತ್ರಿಪಡಿಸಿಕೊಂಡು ಹರಾಜಿನಲ್ಲಿ ಭಾಗವಹಿಸಲು ತಿಳಿಸಿದೆ.

ಉಪ ನಿರ್ದೇಶಕರು,
ಪಿ.ಆರ್. 1691 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ತುಮಕೂರು.

**COMMERCIAL TAXES DEPARTMENT**

**No./CTD/LVO-020/ /2006-07, Bangalore, Dated: 23rd November 2006**

IN PURSUANCE OF THE PROVISIONS CONTAINED IN SUB RULE (i) OF RULE 6 OF THE CST (KARNATAKA) RULES 1957 IT IS HEREBY NOTIFIED FOR GENERAL INFORMATION THAT THE DECLARATION IN "FORM-C" SHOWN BELOW IS DECLRED TO BE OBSOLETE AND INVALID

| Number (including Code No.) of declaration form/s lost destroyed or stolen | Name and address of the dealer to whom declaration form/s is / are issued by the Department with date of issue | Registration Certificate No. of the dealer under CST Act 1956 | The Address of the dealer to whom the declaration is/ are sent | Date of issue of forms/s by the dealer | Whether lost/ destroyed or stolen | Remarks |
|---|---|---|---|---|---|---|
| No. TCK-R2987016 | M/s Monet Sales Corporation, No. 1401, Narayanappa Road, Ramaswamy Palya, Bangalore-560 033 Dated 6.2.2006 | TIN No.29580016765 CST No.06983091 | M/s Elizabeth Adrena, E-857, DSIDC Narela Industrial park New Delhi-110 040 | 8.2.2006 | lost | |

Now, therefore, it is hereby notified that the above said declaration Form-C shall not be valid for the purpose of sub-section 4 of the section 8 of the CST Act 1956.

Asst. Commr. of Comml. Taxes,
P.R. 1692 (L.V.O.)-020, Bangalore - 560 009

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಸಿಆಸುಇ 134 ಶಿವಾನೀ 2006, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2006**

**ವಿಷಯ:** ಸಚಿವಾಲಯದ ಇಲಾಖಾ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳು ಹೊಸ ವಾಹನ ಖರೀದಿಸುವ ಬಗ್ಗೆ ಸೂಚನೆಗಳು.

**ಉಲ್ಲೇಖ:**
1. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 87 ಶಿವಾನೀ 2000 ದಿನಾಂಕ: 29.8.2000.
2. ಸುತ್ತೋಲೆ ಸಂಖ್ಯೆ: ಸಿಆಸುಇ 19 ಶಿವಾನೀ 2005, ದಿನಾಂಕ: 3.6.2005.
3. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 82 ಶಿವಾನೀ 2006, ದಿನಾಂಕ: 12.10.2006.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ಸರ್ಕಾರದ ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ರೂ. 4.25 ಲಕ್ಷ ಗರಿಷ್ಠ ಮಿತಿಯೊಳಗೆ ವಾಹನನ್ನು ಖರೀದಿಸಲು ಅವಕಾಶ ಕಲ್ಪಿಸಲಾಗಿತ್ತು. ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸುತ್ತೋಲೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು : ಕಾರ್ಯದರ್ಶಿಗಳು : ಇಲಾಖಾ ಮುಖ್ಯಸ್ಥರುಗಳಿಗೆ ಮಾರುತಿ ಎಸ್ಟೀಮ್ ಹಾಗೂ ಇತರೆ ಇಂಧನ ಉಳಿತಾಯ ಹೊಂದಿರುವ ವಾಹನಗಳನ್ನು ಖರೀದಿಸಲು ಅವಕಾಶ ಮಾಡಲಾಗಿತ್ತು. ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು : ಕಾರ್ಯದರ್ಶಿಗಳಿಗೆ ಹೊಸ ವಾಹನ ಖರೀದಿಸಲು ಹಿಂದೆ ನಿಗದಿಪಡಿಸಿದ್ದ ವಾಹನದ ಬೆಲೆಯ ಗರಿಷ್ಠ ಮಿತಿಯನ್ನು ರೂ.6.5 ಲಕ್ಷ (ತೆರಿಗೆ ಹೊರತುಪಡಿಸಿ) ಗಳಿಗೆ ಪರಿಕರಿಸಲಾಗಿದೆ. ನಾಮನಿರ್ದೇಶಿತ ವಾಹನ ಪಡೆಯಲು ಅರ್ಹರಿರುವ ಇಲಾಖಾ ಮುಖ್ಯಸ್ಥರಿಗೂ ಈ ಸೌಲಭ್ಯ ಒದಗಿಸುವ ಅಗತ್ಯತೆಯನ್ನು ಪರಿಶೀಲಿಸಿದೆ.

ಈ ಹಿನ್ನೆಲೆಯಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 82 ಶಿವಾನೀ 2006, ದಿನಾಂಕ: 12.10.2006ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು : ಕಾರ್ಯದರ್ಶಿಗಳಿಗೆ ಹೊಸ ವಾಹನ ಖರೀದಿಗೆ ನಿಗದಿಪಡಿಸಿರುವ ರೂ.6.50 ಲಕ್ಷಗಳು (ತೆರಿಗೆ ಹೊರತುಪಡಿಸಿ) ಗರಿಷ್ಠ ಮಿತಿ ಸೌಲಭ್ಯವನ್ನು ಇಲಾಖಾ ಮುಖ್ಯಸ್ಥರುಗಳಿಗೆ ವಾಹನ ಖರೀದಿಸುವ ಪ್ರಕರಣಗಳಿಗೂ ಸಹ ವಿಸ್ತರಿಸಿ ಆದೇಶಿಸಿದೆ.

**ಎಸ್. ತಿಪ್ಪೇಸ್ವಾಮಿ**
ಪಿ.ಆರ್. 1693 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ದೊಡ್ಡಬಳ್ಳಾಪುರ ಉಪವಿಭಾಗ ದೊಡ್ಡಬಳ್ಳಾಪುರ**

**ಸಂ: ಎಆರ್ 47:ವಿ.ಸೇ:9:2006-07, ದಿನಾಂಕ: 20ನೇ ನವೆಂಬರ್ 2006**

**ವಿಷಯ:** ಗುರುವನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** 1. ಸಂಘದ 6 ಜನ ನಿರ್ದೇಶಕರುಗಳ ರಾಜಿನಾಮೆ ದಿ:18.10.2006.

2. ಕಾರ್ಯದರ್ಶಿ ಹಾ.ಉ.ಸ.ಸಂ.(ನಿ) ಗುರುವನಹಳ್ಳಿ ರವರ ಪತ್ರ ದಿ:6.11.2006.

**ಪ್ರಸ್ತಾವನೆ:**

ಗುರುವನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಈ ಸಂಘದ 9 ಜನ ಆಡಳಿತ ಮಂಡಳಿಯ ಸದಸ್ಯರುಗಳಲ್ಲಿ 6 ಜನ ನಿರ್ದೇಶಕರುಗಳು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿರುವುದರಿಂದ ಸಮಿತಿ ಸದಸ್ಯರ ಸಂಖ್ಯೆಯು ಸಭೆಯ ಅವಶ್ಯಕ ಸಂಖ್ಯೆ (ಕೋರಂಗೆ) ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಲ್ಲದೆ ಶೂನ್ಯವಾಗಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1) ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001, ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಹಿದಾಯತ್-ಉಲ್ಲಾ-ಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ಉಪವಿಭಾಗ ದೊಡ್ಡಬಳ್ಳಾಪುರ ಆದ ನಾನು ಗುರುವನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಈ ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ 6 (ಆರು) ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಮಾರ್ಗ ವಿಸ್ತರಣಾಧಿಕಾರಿಗಳು ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ, ನೆಲಮಂಗಲ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗಿರುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಂಡು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಜಿಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ, ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 20ನೇ ನೆಂಬರ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್-ಉಲ್ಲಾ-ಖಾನ್**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 1694

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಕೃಮಾಇ/115/ನಿಯವಿ/2006, ದಿನಾಂಕ: 29/30ನೇ ನವೆಂಬರ್ 2006**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪ ಪ್ರಕರಣ (2)ರ ಮೇರೆಗೆ ಹೊರಡಿಸಲಾಗಿದ್ದ ಅಧಿಸೂಚನೆ ಸಂ:ರಾಮಾಇ/54/ನಿಯವಿ/88, ದಿನಾಂಕ: 25.6.1988ರ ಅಧಿಸೂಚನೆಯಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು ಬೆಂಗಳೂರು ಇವರು ಬಿಜಾಪುರ ನಗರಸಭಾ ಪರಿಮಿತಿಯೊಳಗಿನ ಸ್ಥಳೀಯವಾಗಿ ಕಿರಾಣ ಬಜಾರ್ ಎಂದು ಕರೆಯಲ್ಪಡುವ ಸ್ಥಳವನ್ನು ಬೆಲ್ಲದ ಮಾರಾಟ ನಿಯಂತ್ರಣಕ್ಕಾಗಿ ಅನುಸೂಚಿಯಲ್ಲಿ ನಿಗದಿಪಡಿಸಿದ್ದ ಸ್ಥಳವನ್ನು ಬಿಜಾಪುರ ಸಮಿತಿಯ ಮಾರುಕಟ್ಟೆ ಉಪ ಪ್ರಾಂಗಣವೆಂದು ಘೋಷಿಸಿದ್ದರು.

ಅಲ್ಲಿಂದ ಬೆಲ್ಲದ ವಹಿವಾಟು ಘೋಷಣೆಯಾದ ಮೇಲಿನ ಸ್ಥಳದಲ್ಲಿ ನಡೆಯುತ್ತಾ ಬಂದಿರುತ್ತದೆ. ಆದರೆ, ದಿನಾಂಕ:6.4.2006 ರಿಂದಸದರಿ ಬೆಲ್ಲದ ವಹಿವಾಟನ್ನು ಮುಖ್ಯ ಮಾರುಕಟ್ಟೆ ಪ್ರಾಂಗಣದಲ್ಲಿರುವ ಉಳ್ಳಾಗಡ್ಡಿ ಪ್ರಾಂಗಣದಲ್ಲಿ ಲಭ್ಯವಿರುವ ಹರಾಜುಕಟ್ಟೆಗೆ ಸ್ಥಳಾಂತರಿಸಿದ್ದು, ಬೆಲ್ಲದ ವಹಿವಾಟು ಮುಖ್ಯ ಪ್ರಾಂಗಣದಲ್ಲಿಯೇ ನಡೆಯುತ್ತಿರುತ್ತದೆ. ಇನ್ನೂ ಹೆಚ್ಚುವರಿ ಸೌಲಭ್ಯಗಳನ್ನು ರೈತ ಸಮುದಾಯಕ್ಕೆ ಹಾಗೂ ಖರೀದಿದಾರರಿಗೆ ಪೂರೈಸಲು ಸಮಿತಿಯು ಕ್ರಮ ಕೈಗೊಂಡಿರುತ್ತದೆ. ಹೀಗಾಗಿ ಪ್ರಸ್ತುತ ಮಾರುಕಟ್ಟೆ ಪ್ರಾಂಗಣದಲ್ಲಿ ನಡೆಯುತ್ತಿರುವ ಬೆಲ್ಲದ ವಹಿವಾಟಿಗೆ ಯಾವುದೇ ತೊಂದರೆ ಇಲ್ಲದಿರುವ ಕಾರಣ, ಈ ಕೆಳಕಾಣಿಸಿದ ಅನುಸೂಚಿಯಲ್ಲಿನ ಮಾರುಕಟ್ಟೆ ಉಪ ಪ್ರಾಂಗಣವನ್ನು ರದ್ದುಪಡಿಸಲು ಉದ್ದೇಶಿಸಿ, ಸಾರ್ವಜನಿಕರಿಂದ ಸಲಹೆ/ಆಕ್ಷೇಪಣೆಗಳನ್ನು ಆಹ್ವಾನಿಸುವ ಕುರಿತು ಕರಡು ಅಧಿಸೂಚನೆಯನ್ನು ಈ ಕಛೇರಿಯ ಪತ್ರ ಸಂಖ್ಯೆ:ಕೃಮಾಇ/115/ನಿಯವಿ/2006, ದಿನಾಂಕ: 25.7.2006ನ್ನು ಹೊರಡಿಸಲಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಇದೇ ಸಮಸಂಖ್ಯೆಯ ತಿದ್ದುಪಡಿಯನ್ನು ದಿನಾಂಕ: 16.9.2006ರಂದು ಹೊರಡಿಸಲಾಗಿರುತ್ತದೆ. ಈ ಅಧಿಸೂಚನೆಗಳನ್ನು ಕರ್ನಾಟಕ ರಾಜ್ಯ ಪತ್ರ, ಭಾಗ-3ರಲ್ಲಿ ದಿನಾಂಕ: 31.8.2006 ಮತ್ತು 12.10.2006ರಲ್ಲಿ ಪ್ರಕಟಿಸಲಾಗಿತ್ತು. ಆದರೆ, ನಿಗದಿತ ಅವಧಿಯಲ್ಲಿ ಯಾವುದೇ ಸಲಹೆ ಮತ್ತು ಆಕ್ಷೇಪಣೆಗಳು ಬಂದಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1960ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪ ಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ವಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ

ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆ ಮೂಲಕ ಘೋಷಿಸಲಾದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಈ ಕೆಳಕಾಣಿಸಿದ ಸೀಮಾಬದ್ಧ ಸ್ಥಳದ ಮಾರುಕಟ್ಟೆ ಉಪ ಪ್ರಾಂಗಣವನ್ನು ರದ್ದುಪಡಿಸಲಾಗಿದೆ.

**ಅನುಸೂಚಿ**

ವಿಜಾಪುರ ನಗರಸಭಾ ಪರಿಮಿತಿಯೊಳಗೆ ಸ್ಥಳೀಯವಾಗಿ "ಕಿರಾಣಾ ಬಜಾರ್" ಎಂದು ಕರೆಯಲ್ಪಡುವ ಈ ಕೆಳಗಿನ ಸೀಮಾಬದ್ಧ ವ್ಯಾಪಾರ ಸ್ಥಳ:-

ಪೂರ್ವಕ್ಕೆ : ಬಾರಾಕಮಾನ ಮತ್ತು ಶಹಾಪೇಟ ಓಣಿ ರಸ್ತೆ
ಪಶ್ಚಿಮಕ್ಕೆ : ಸಿದ್ದೇಶ್ವರ ರಸ್ತೆ
ಉತ್ತರಕ್ಕೆ : ಸಿದ್ದೇಶ್ವರ ದೇವಾಲಯದ ಎದುರಿನ ರಸ್ತೆ (ಸ್ಟೇಷನ್ ಹಿಂಭಾಗದ ರಸ್ತೆ)
ದಕ್ಷಿಣಕ್ಕೆ : ಜೈನ ದೇವಾಲಯದ ಎದುರಿನ ಬಿದಿ (ಕಲಾದಗಿ ಗಲ್ಲಿ ಮತ್ತು ಕಬ್ರಾಜಿ ಬಜಾರ್)

**ಜಿ.ಎಸ್. ನಾರಾಯಸ್ವಾಮಿ**
ನಿರ್ದೇಶಕರು

ಪಿ.ಆರ್. 1695

**ಲೋಕೋಪಯೋಗಿ ಇಲಾಖೆ**

**ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿ ಲೋಕೋಪಯೋಗಿ ಇಲಾಖೆ**

**ಮುಂಡರಗಿ ಉಪ ವಿಭಾಗ ಮುಂಡರಗಿ**

**ಅಧಿಸೂಚನೆ ನಂಃಸಕಾನಿಇಂಃಮುಃಮಾಹಅಃ2006-07:314 ದಿನಾಂಕಃ 3ನೇ ಅಕ್ಟೋಬರ್ 2006**

2005ರ ಮಾಹಿತಿ ಹಕ್ಕು ಅಧಿನಿಯಮ (2005 ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಲೋಕೋಪಯೋಗಿ ಇಲಾಖೆ ಉಪ ವಿಭಾಗ ಮುಂಡರಗಿ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್-5 (1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಮತ್ತು ಸೆಕ್ಷನ್-5 (2) ರಡಿಯಲ್ಲಿ "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19 (1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರಸಂ | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19 (1) |
|---|---|---|---|---|
| 1) | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪ ವಿಭಾಗ ಮುಂಡರಗಿ | ಸಹಾಯಕ ಇಂಜನೀಯರವರ (ಸೇವೆಯಲ್ಲಿ ಹಿರಿಯರು ) ಸಹಾಯಕ ಕಾರ್ಯನಿರ್ವಾಹಕ ಇಂಜನಿಯರರು ಲೋಕೋಪಯೋಗಿ ಇಲಾಖೆ ಉಪವಿಭಾಗ ಮುಂಡರಗಿ ಕಚೇರಿ | ಪ್ರ. ದ. ಸ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿ ಲೋಕೋಪಯೋಗಿ ಇಲಾಖೆ ಉಪ ವಿಭಾಗ ಮುಂಡರಗಿ ಕಚೇರಿ | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪ ವಿಭಾಗ ಮುಂಡರಗಿ |

**ಎಸ್.ಕೆ.ಹಿರೇಮಠ**
ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು
ಲೋಕೋಪಯೋಗಿ ಇಲಾಖೆ ಉಪವಿಭಾಗ
ಮುಂಡರಗಿ

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 ( ಭಾರತ ಸರ್ಕಾರ)**

**ಕರ್ನಾಟಕ ಸರಕಾರ**

**ಲೋಕೋಪಯೋಗಿ ಇಲಾಖೆ ಉಪ ವಿಭಾಗ ಮುಂಡರಗಿ**

**ಕೈಪಿಡಿ-1**

**ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು**

ಕರ್ನಾಟಕ ರಾಜ್ಯದಲ್ಲಿನ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಲೋ ಇ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಮತ್ತು ಲೋಇ ವಸತಿ ಗೃಹಗಳು, ತಹಶೀಲ್ದಾರ ಕಚೇರಿ ಕಟ್ಟಡ ಹಾಗೂ ಉಪ ಖಜಾನೆ ಕಚೇರಿ ಕಟ್ಟಡಗಳ ನಿರ್ಮಾಣ, ಹಾಗೂ ನಿರ್ವಹಣೆ ಕೆಲಸಗಳನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ 1959 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಈ ಉಪ ವಿಭಾಗದ ಭೌಗೋಳಿಕ ವಿಸ್ತೀರ್ಣವು 884 ಚದರ ಕಿಮೀ ಇರುತ್ತದೆ. ಮತ್ತು 2001 ರ ಜನಗಣತಿ ಪ್ರಕಾರ 176427 ಜನಸಂಖ್ಯೆ ಇರುತ್ತದೆ. ಈ ಉಪ ವಿಭಾಗವು ಕಾರ್ಯನಿರ್ವಾಹಕ ಇಂಜನೀಯರರು ಲೋಇ ವಿಭಾಗ ಗದಗ, ಅಧೀಕ್ಷಕ ಇಂಜನೀಯರರು ಲೋ . ಇ . ಧಾರವಾಡ ವೃತ್ತ ಧಾರವಾಡ ಹಾಗೂ ಮುಖ್ಯ ಇಂಜನೀಯರರು ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರ ಆಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ಉಪ ವಿಭಾಗದಡಿಯಲ್ಲಿ 2006-2007 ರ ಪ್ರಕಾರ ರಸ್ತೆ ಸೇತುವೆ ಮತ್ತು ಕಟ್ಟಡಗಳ ವಿವರ ಈ ಕೆಳಗಿನಂತಿರುತ್ತದೆ.

**ಅ) ರಸ್ತೆಗಳು**

| | | |
|---|---|---|
| 1) ರಾಜ್ಯ ಹೆದ್ದಾರಿ | ಕಿಮೀ | 62.21 |
| 2) ಜಿಲ್ಲಾ ಮುಖ್ಯ ರಸ್ತೆ | ಕಿಮೀ | 148.97 |

**ಬ) ಸೇತುವೆಗಳು**

| | | |
|---|---|---|
| 1) ಬೃಹತ್ ಸೇತುವೆಗಳು | ನಂ | 12 |
| 2) ಸಣ್ಣ ಸೇತುವೆಗಳು | ನಂ | 78 |
| 3) ಅಡ್ಡ ಮೋರಿಗಳು | ನಂ | 173 |

**ಕ) ಕಟ್ಟಡಗಳು**

| | | |
|---|---|---|
| 1) ಮುಖ್ಯ ಕಟ್ಟಡಗಳು | ನಂ | 14 |
| 2) ಸಣ್ಣ ಕಟ್ಟಡಗಳು | ನಂ | 13 |

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಇವರು ಲೋಇ ಮುಂಡರಗಿ ಉಪ ವಿಭಾಗ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ ಇವರ ಆಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ
2) ಆಡಳಿತ ಶಾಖೆ
3) ಲೆಕ್ಕ ಶಾಖೆ
4) ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:–**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರು ಈ ಉಪ–ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜನೀಯರರು–2 ಕೆಲಸ ನಿರೀಕ್ಷಕರು–4 ಕಾರ್ಯನಿರ್ವಹಿಸುತ್ತಾರೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.

2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಚೇರಿಗೆ ಸಲ್ಲಿಸುವುದು.

3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಚೇರಿಗೆ ಸಲ್ಲಿಸುವುದು.

4) ಎಂ ಎಂ ಆರ್ ಮತ್ತು ಕೆ ಡಿ ಪಿ ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವುದು.

5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.

6) ತಾಲೂಕ ಮಟ್ಟದ ಕೆಡಿಪಿ ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜರಾಗುವದು.

7) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಚೇರಿಗೆ ಸಲ್ಲಿಸುವುದು.

8) ತಾಲೂಕದಲ್ಲಿನ ಸಾರ್ವಜನಿಕ ಕಚೇರಿ ಕಟ್ಟಡಗಳ ಭಾಡಿಗೆ ಮೊತ್ತವನ್ನು ತಯಾರಿಸಿ ವಿಭಾಗ ಕಚೇರಿಗೆ ಸಲ್ಲಿಸುವುದು.

9) ಹೆದ್ದಾರಿ ಕೋಶದ ಮಾಹಿತಿಯನ್ನು ತಯಾರಿಸಿ ವಿಭಾಗ ಕಚೇರಿಗೆ ಸಲ್ಲಿಸುವುದು.

**1) ಆಡಳಿತ ಶಾಖೆ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋ ಇ ಉಪಭಾಗ ಮುಂಡರಗಿ ಕಛೇರಿಯಲ್ಲಿ ಮಂಜೂರಾಗಿರುವ 14 ಹುದ್ದೆಗಳ ಪೈಕಿ 13 ಸಿಬ್ಬಂದಿಯವರು ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ–1 ವರ್ಗ ಬಿ–2 ವರ್ಗ– ಸಿ–7 ಮತ್ತು ವರ್ಗ ಡಿ–4 ಸಂಖ್ಯೆಗಳಿರುತ್ತವೆ. ಇದಲ್ಲದೆ ಸೂಪರನ್ಯೂಮರರಿ ಹುದ್ದೆಯಲ್ಲಿ ಸಿ–5 , ಡಿ ವರ್ಗದಲ್ಲಿ – 7 ಸಂಖ್ಯೆ ಇರುತ್ತವೆ.

ಆಡಳಿತ ಶಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕಾರ್ಯ ನಿರ್ವಹಿಸುತ್ತಾರೆ. ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು , ಭವಿಷ್ಯ ನಿಧಿಯ ದಾಖಲೆಗಳನ್ನು ನಿರ್ವಹಿಸುವುದು ವೇತನ ಬಿಲ್ಲು ನಿರ್ವಹಿಸುವುದು ಹಾಗೂ ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವುದು ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವದು . ಎಲ್ಲ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಒಪ್ಪಿಗೆ ಹಾಗೂ ಆದೇಶಗಳ ಪ್ರಕಾರ ಪಾಲಿಸುತ್ತಾರೆ.

ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ವಿದ್ಯುಚ್ಛಕ್ತಿ ಮತ್ತು ದೂರವಾಣಿಗೆ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.

2) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ದಾಖಲೆಗಳನ್ನು ನಿರ್ವಹಿಸುವುದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ, ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು.

3) ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ತಯಾರಿಸುವುದು. ಕಾರ್ಯ ನಿರ್ವಹಣಾ ವರದಿಯನ್ನು ವಿಭಾಗ ಕಚೇರಿಗೆ ಸಲ್ಲಿಸುವುದು.

4) ವಿಧಾನ ಸಭೆ, ವಿಧಾನ ಪರಿಷತ್ತು ಹಾಗೂ ಭರವಸೆಗಳ ವರದಿಯನ್ನು ರವಾನಿಸುವುದು.

5) ಆಡಳಿತಕ್ಕೆ ಸಂಬಂಧಿಸಿದಂತೆ ಆಯವ್ಯಯ ಅಂದಾಜು ಪಟ್ಟಿಗೆ ಬೇಕಾಗುವ ಮಾಹಿತಿಯನ್ನು ಒದಗಿಸುವುದು

